


ಸಂಗ್ರಾಹಕ : ವೈದ್ಯ ಕಾ. ರಾ. ಪುರಾಣಿಕ

ಬೆಲೆ. ರೂ. 2-00

# ರುದ್ರಾಕ್ಷಿ ಮಹಾತ್ಮೆ



ಸಂಗ್ರಾಹಕರು :
ವೈದ್ಯ. ಕಾ. ರಾ ಪುರಾಣಿಕ



ಪ್ರಕಾಶಕ :
ಶ್ರೀ ಮಂಜುನಾಥ ಮಾಧವಕಾಮತ್
2814 ಹಳ್ಳದಕೇರಿ, ಮೈಸೂರು.
1993

# ಮುನ್ನುಡಿ

ವೈದ್ಯ ಕಾ.ರಾ. ಪುರಾಣಿಕರು ಪತ್ರ ಮುಖೇನ ಪುನಃ-ಪರಿಚಿತರಾಗಿ ತಾವು ಆಯುರ್ವೇದದ ಬಗ್ಗೆ ಮಾಡಿರುವ ಕೆಲಸಗಳನ್ನು ಬರೆದರು, ಹಾಗೂ ತಾವೇ ಹರಿದ್ವಾರದಿಂದ ಮೈಸೂರಿಗೆ ಆಗಮಿಸಿ ಈ ಎಲ್ಲ ಹಸ್ತ ಪ್ರತಿಗಳನ್ನು ತೋರಿಸಿದರು. ಆಗ ನನಗೆ ಆದ ಸಂತೋಷ, ಆಶ್ಚರ್ಯಗಳಿಗೆ ಮೇರೆಯೇ ಇರಲಿಲ್ಲ. ಅನೇಕ ಹಸ್ತಪ್ರತಿಗಳು ಸಂಸ್ಕೃತ, ಹಿಂದಿ ಮತ್ತು ತುಳು ಭಾಷೆ ಗಳಲ್ಲಿವೆ. "ರುದ್ರಾಕ್ಷಿ ಮಹಾತ್ಮೆ", "ಶ್ರೀ ಧನ್ವಂತರಿ" ಇವೆರಡರ ಕನ್ನಡ ಭಾಷೆಯವುಗಳಾಗಿವೆ. ಆದ್ದರಿಂದ ಇವೆರಡನ್ನು ಪ್ರಕಟನೆ ಮಾಡಲು ಕೈಕೆತ್ತಿಕೊಂಡು ನಿಮ್ಮ ಮುಂದೆ ಇಡುತ್ತಿದ್ದೇನೆ. ಮುಂದಿನ ಕರ್ತವ್ಯ ನಿಮ್ಮದು.

ಪತ್ರಗಳ ವಿನಿಮಯ ಕಾಲದಲ್ಲಿ ನನ್ನ ಸ್ವ-ಅನುಭವದ ಒಂದು ಪ್ರತಿ-ಬಿಂಬ ಕೂಡ ಕಂಡು ಬಂದಿತು. ಆಯುರ್ವೇದ ಆರ್ಶಯ ವೈದ್ಯ. ಅದರಲ್ಲಿ ಅಗಣಿತ ಮುತ್ತು ರತ್ನಗಳಿವೆ. ಅವನ್ನು ಹೊರತೆಗೆದು ಪುಟಕೊಟ್ಟು ಹಂಚುವ ವ್ಯಕ್ತಿಗಳೂ ಇದ್ದಾರೆ. ಅಷ್ಟೇ ಏಕೆ! ಹೊರತೆಗೆದು ಹಂಚು-ತ್ತೇವೆಂದವರಿಗೂ ಇಂದು ಉತ್ತೇಜನ ದೊರಕದಾಗಿದೆ. ಕರ್ನಾಟಕ ಸರ್ಕಾರ ಅದಕ್ಕೆ ಬೇಕಾಗಿರುವಷ್ಟು ಪ್ರೋತ್ಸಾಹ ಕೊಡುತ್ತಿದೆಯೇ ಎಂಬ ಜಿಜ್ಞಾಸೆ ಇದೆ. ನಮ್ಮ ಇಲಾಖೆಯ ಡೈರೆಕ್ಟರವರು ಬಹಳಷ್ಟು ಈ ಪ್ರಕಟನಾದಿಗಳ ಬಗ್ಗೆ ಆಸ್ತೆವಹಿಸಿದ್ದರೂ ಸರ್ಕಾರದ ಆಶೀರ್ವಾದ ಕಡಿಮೆಯಾದ್ದರಿಂದ ಬದ್ಧ-ಹಸ್ತರಾಗಿದ್ದಾರೆ.

ಇದೇ ರೀತ್ಯಾ ಆಯುರ್ವೇದ ಉಳಿಸಲು ಬೆಳೆಸಲು ಹೊರಟ ಅನೇಕ ಸಂಸ್ಥೆಗಳೂ ಇವೆ. ಆದರೆ ! ! ! ಇದು ನಾವು ನೋಡುತ್ತಿರುವ ದೃಶ್ಯ.

ಇನ್ನು ಬಹುರಾಷ್ಟ್ರೀಯ ಹಾಗೂ ಭಾರತೀಯ ಸಂಸ್ಥೆಗಳು ಈ ಬಗ್ಗೆ ಗಮನ ಹರಿಸುವ ಬಗ್ಗೆ ಯೋಚಿಸಿದರೆ-ಅವರಿಗೆ ಸಿಗುವ ಸೌಲಭ್ಯಗಳೇ ಕಡಿಮೆ. ಉತ್ತೇಜನ ಇನ್ನೂ ಸೀಮಿತ. ಹೀಗಿರುವಾಗ ಈ ನಿಟ್ಟಿನಲ್ಲೂ ಸಹಕಾರ ಕಷ್ಟವೇನೋ—ಎನಿಸಿದೆ.

ವೈದ್ಯ ಕಾ.ರಾ. ಪುರಾಣಿಕರ ಯೋಜನೆ—ಯೋಜನೆ ಅತಿ ವಿಸ್ತಾರವಾದುದು. ಅವರ ಒಂದು ಮಾತು ಎಲ್ಲರಿಗೂ ಹೃದಯಸ್ಪರ್ಶಿ : "ನನ್ನದಂತೂ ಆಯಿತು ಸಿಕ್ಕಿದ್ದು ಓದಿದೆ; ಹೇಳಿಕೊಟ್ಟಿದ್ದು ಕಲಿತೆ; ಇದರಲ್ಲಿ ಧೃಢ ಸತ್ಯ ಎಷ್ಟು-ಕಟ್ಟು ಕತೆ ಎಷ್ಟು ಅರಿಯಬೇಕಾಗಿದೆ. ಇಂಥ ಎಲ್ಲ ಪುರಾತನ ಹಸ್ತಪ್ರತಿ ಇತ್ಯಾದಿಗಳನ್ನು ಓದಿದ ಮೇಲೆ ಹುರುಳಿಲ್ಲದ್ದನ್ನು ಹೊರಹಾಕಿ, ಅಗತ್ಯಗಳನ್ನು ಕ್ರೋಢೀಕರಿಸಿ ಬರೆದಿಟ್ಟಿದ್ದೇನೆ. ನನ್ನ ಕಾಲದಲ್ಲಿ (ಅವರಿಗೆ ಇಂದು 78 ವರ್ಷ) ಇದು ಬೆಳೆದು ಕಾಣುತ್ತದೋ ಇಲ್ಲವೋ ಮುಂದಿನ ಪೀಳಿಗೆಗಾದರೂ ಮಾರ್ಗದರ್ಶನವಾಗಲಿ."

–ಇದು ಅವರ ನೋವನ್ನು ತೋರಿಸುತ್ತದೆ. ಇದೇ ನೋವನ್ನೇ ನಾವೂ ಮೊದಲುಗೊಂಡು ಅನುಭವಿಸಿದ ಅನೇಕರಿದ್ದಾರೆ. ಇದಕ್ಕೆ ಮದ್ದು-ನೀವು; ನಿಮ್ಮ ಸಹಕಾರ; ನಮ್ಮ ತನವನ್ನು ಎತ್ತಿ ಹಿಡಿದು ಕೈ ಎಸ್ಕ ಬೇಕೆಂದು ತೆಗೆದುಕೊಳ್ಳಬೇಕಾದ ನಿರ್ಧಾರ." ಇದಕ್ಕೆ ಮದ್ದು ಆಗಬಹುದೇನೋ.

ಕೇವಲ ಸನ್ಮಾನ, ಬಿರುದುಗಳ ಹಂಚಿಕೆಯಿಂದ ಯಾವ ಶಾಸ್ತ್ರವೇ ಆಗಲಿ ಉದ್ಧಾರವಾಗುವುದಿಲ್ಲ. ಕೇವಲ ಹಾರಿಕೆ ಮಾತುಗಳಿಂದ ನಮ್ಮ ತನದ ಉಳಿವು-ಬೆಳವು ಆಗುವುದಿಲ್ಲ. ಇದಕ್ಕೆಬೇಕಾಗಿರುವುದು ಸಹಕಾರ-ಸಹವೀರ್ಯ (ಸಹವೀರ್ಯಂಕರವಾವಹೈ ಎಂಬಂತೆ). ಹಣ ಇನ್ನೊಂದು ಅತಿಮುಖ್ಯ ಅಗತ್ಯ.

ವೈದ್ಯ ಕಾ.ರಾ. ಪುರಾಣಿಕರು ಏಕಾಂತದಲ್ಲಿ ಕುಳಿತು, ಆ ಕಡೆ ಗಂಗೆ, ಈ ಕಡೆ ದೇವಸ್ಥಾನಗಳನ್ನು ನೋಡುತ್ತಾ ಹರಿದ್ವಾರದಲ್ಲಿ ವಾಸಮಾಡುತ್ತಲೂ ತಮ್ಮ ತಾಯ್ನಾಡಾದ ಕನ್ನಡಾಂಬೆಗೆ ಸೇವೆ ಸಲ್ಲಿಸುತ್ತಿದ್ದಾರೆ. ತಮ್ಮ ತಾಯ್ನುಡಿಯಾದ ಕೊಂಕಣಿಯಲ್ಲಿ ಆಯುರ್ವೇದ ಪುಸ್ತಕಗಳನು ಬರೆಯುತ್ತಿದ್ದಾರೆ. ವೃಕ್ಷ ಆಯುರ್ವೇದ ಕನ್ನಡದಲ್ಲಿ ಛಾಪಿಸಲು ಉತ್ಸುಕರಾಗಿದ್ದಾರೆ. ಹೋದ ಶತಮಾನದ ಕೊನೆಯ ಭಾಗದಲ್ಲೇ ಬರೆದಿಟ್ಟದ್ದು ಇಂದು ಒಂದು ಪ್ರತಿಕೂಡ ಸಿಗುವುದು ದುರ್ಲಭವಾದ ಕಿಟ್ಟೆಲ್ ರವರ ಸಹಸ್ರಾರ್ಧ ವೃಕ್ಷ ವರ್ಣನೆಯನ್ನು ಹೊಂದಿದ್ದಾರೆ. ಕನ್ನಡದಲ್ಲಿ ಕನ್ನಡಿಗರಿಗೆ ತಿಳಿಗನ್ನಡದಲ್ಲಿ ಅರ್ಥವಾಗುವ ಪಠ್ಯಪುಸ್ತಕಗಳಿಲ್ಲದಿರುವ ಬಗ್ಗೆ, ಇಂದೂ **Plant identification** ಬಗ್ಗೆ ಇರುವ ಜಿಜ್ಞಾಸೆಯ ಬಗ್ಗೆ ವಿಷಾದ ಪಡುವ ವ್ಯಕ್ತಿ ಆಗಿದ್ದಾರೆ.

ಅವರಿಗೆ, ಹಾಗೂ ಅವರ ಮೂಲಕ ನಮ್ಮ ಆರ್ಯತೆಗೆ ಸಲ್ಲಿಸುವ ಸೇವೆ ಈ ಎರಡು ಪುಸ್ತಕಗಳನ್ನು ಹೆರತರುತ್ತಿರುವುದು. ಈಕಾಲದಲ್ಲಿ ಶ್ರೀ ಕಾ.ರಾ. ಪುರಾಣಿಕರೊಡನೆ ಕಳೆದ ಕೆಲವು ಗಂಟೆಗಳಲ್ಲಿ ಅವರ ಬಗ್ಗೆ ತಿಳಿದು ಕೊಂಡದ್ದು–ಅವರ "ಅಹಂ" ಇಲ್ಲದ ಮನೋಭಾವ ; ಸುಖ–ದುಃಖಗಳ ಏಕೀ ಭಾವ; ಪ್ರಪಂಚದಲ್ಲಿ ಮಾಡಬೇಕಾದ್ದೆಷ್ಟೊಂದಿದ್ದರೂ ಮಾಡಲಾಗು ತ್ತಿಲ್ಲವಲ್ಲ ಎಂಬ ಕಳಕಳಿ ಮನೋಭಾವ.

ನನ್ನ ಭೇಟಿಯಾಗಿ ನನ್ನಿಂದ ಈ ಅಲ್ಪ ಸೇವೆ ಮಾಡಲು ಆಸ್ಪದ ಒದಗಿಸಿದ ಶ್ರೀ ಕಾ.ರಾ. ಪುರಾಣಿಕರಿಗೆ ನಮಸ್ಕಾರಗಳು. ಹಾಗೂ ಸರ್ಕಾರ ಖಾಸಗಿ ವಲಯದ ಪ್ರಭಾವಿತ ವ್ಯಕ್ತಿಗಳು ಇವರಿಗೆ ಉತ್ತೇಜನ ಕೊಟ್ಟು ಕನ್ನಡಕ್ಕೆ ಅಪಾರ ಗ್ರಂಥ ನಿಧಿ ದೊರಕಿಸಿಕೊಡಲಿ ಎಂದು ಭಗವಾನ್ ಶ್ರೀ ಧನ್ವಂತರಿಯಲ್ಲಿ ಪ್ರಾರ್ಥಿಸುತ್ತಾ.

ಪಿ.ಆರ್. ಸೀತಾರಾಂ

# ನಿವೇದನೆ

ಈ ರುದ್ರಾಕ್ಷ ಮಹಾತ್ಮೆ ಸಂಗ್ರಹಕ್ಕೆ ಸ್ಫೂರ್ತಿ–ಕಾರಣ.

1968ರಲ್ಲಿ ನನ್ನ ಹಿರೇ ಮಗಳು (ಆಗ ಪ್ರಾಯ 20) ಮೈಯೆಲ್ಲಾ ತೀವ್ರ ಉರಿಎಂದು ಬೆಂಗಳೂರಿನಿಂದ ಊರಿಗೆ ಬಂದವಳು ತನ್ನ ಅಜ್ಜನ ಮನೆಯಲ್ಲಿಳಿದಳು. ಅಲ್ಲಿ ಆಷರೂಪದ ಮೊಮ್ಮಗಳಿಗೆ ಎಣ್ಣೆ ಸ್ನಾನವಾಯಿತು. ಕೂಡಲೇ ಮೈ ಉರಿ ಹೆಚ್ಚಿದಲ್ಲದೆ ಜ್ವರ 4ರ ಮೇಲೆ ಹತ್ತಿದ್ದನ್ನು ಕಂಡು ಈಗಿಂದೀಗಲೇ ಮಣಿಪಾಲಗೆ ಕೊಂಡು ಹೋಗುವುದು ವಾಸಿಯೆಂದಂತೆ ನನಗೆ ಫೋನ್ ಬಂತು. ಕಾರಿನಲ್ಲಿ ಹಾಕಿ ಅವಳನ್ನು ಮನೆಗೆತಂದು ಆತ್ಮೀಯ ಡಾಕ್ಟರ್‌ರನ್ನು ತೋರಿಸಲಾಗಿ ಅವರು ಸಲ್ಫಾ ಇಂಜಕ್ಷನ್ ಮತ್ತು ಕೆಪ್ಸುಲ್ಸ್ ಕೊಟ್ಟರು. ಜ್ವರ ತೀವ್ರಗತಿಗೇರಿದ್ದನ್ನು ಕಂಡು ಉಡುಪಿ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲರಾದಿ ಎಲ್ಲಾ ಅಧ್ಯಾಪಕ ವರ್ಗವನ್ನು ಮನೆಗೆ ಕರತಂದೆ. ಅವರು ನೋಡಿ ಸಂದಿಗ್ಧತೆ ಕಂಡು ಕೂಡಿ ಚರ್ಚೆಗಾರಂಭವಾಯಿತು.

ಪುಣ್ಯ ಆ ಅಧ್ಯಾಪಕರಲ್ಲೊಬ್ಬ ಆತ್ಮೀಯರು ರೋಗಿಯ ಕಂಕುಳಲ್ಲಿ "ಸಿಡುಬಿನ" ಬೊಕ್ಕೆ ಕಂಡು ಬಂದು ಗುಟ್ಟಿನಲ್ಲಿ ನನಗರುಹಿದರು. ನೋಡಲಾಗಿ ನಿಜ ಕಂಡಿತು. ಕೂಡಲೆ ಸಭೆ ಮುಗಿಸಿ ಅವರನ್ನೇ ಗಪ್ ಚಿಪ್ ಆಗಿ ಪರತು ಕಳುಹಿಸಿ ರೋಗಿ ಮಲಗಿದ ಕೋಣೆ ಬಾಗಿಲು ಮೊದಲು ಮುಚ್ಚಿದೆ. ಆ ಕೋಣೆಯಲ್ಲಿ ಎಳ್ಳೆಣ್ಣೆ ದೀಪ ಹಚ್ಚಿಟ್ಟೆ ಹಾಗೂ ಅವಳಿಗೆ ಪಂಚ ಮುಖಿ ತೇದು ಸುಮಾರು ಒಂದು ಉದ್ದು ಕಾಳಿನಗಾತ್ರ ದಿನಕ್ಕೆರಡು ಸಲ ಜೇನುತುಪ್ಪದಲ್ಲಿ ಹೊಟ್ಟೆಗೆ ಕೊಟ್ಟೆ ಮತ್ತು ಅವಳ ಮೈಮೇಲೆ ಮಾತ್ರವಲ್ಲ ಅವಳ ಹಾಸಿಗೆಯ ಸುತ್ತಲೂ ಶುದ್ಧ ತಾವೆ ದಿನಕ್ಕೆರಡು ಸಲ ಸಿಂಪಡಿಸಿದೆ. (ದೃಶ್ಯ ಮಾತ್ರ ಭಯಾನಕವಾಗಿತ್ತು.)

ಅಧ್ಯಾಪಕರುಗಳನ್ನು ಗಪ್ ಚಿಪ್ ಆಗಿ ಕಳುಹಿಸಲು ಕಾರಣ ಸಿಡುಬೆಂದು ತಿಳಿದಲ್ಲಿ ಸರಕಾರ ಊರಹೊರಗೆ ಕೊರೆಂಟೈನಿಗೆ ಕೊಂಡುಹೋಗಿ

ಅಲ್ಲಿ ಕೊರಗರ ಅನುಪಾನ-ಕಾತ್ಸ್ಯಾರ ಚಿಕಿತ್ಸೆಗಳಲ್ಲದೆ ಅಲ್ಲಿ ನಾವು ಹೋಗಾವಂತಿಲ್ಲ ಪತ್ರಲ್ಲೂ ಮುಖಕೂಡ ನೋಡಲು ಅವಕಾಶವಿರಲಾರದು. ಅಂಥಾ ಸನ್ನಿವೇಶಕ್ಕೆ ಹೆದರಿ ಮೊದಲು ಡಾಕ್ಟರಿಂದ "ಕೋಟೆಲಿ" ಎಂದು ಸರ್ಟಿಫಿ-ಕೇಟು ಪಡೆದೆ ಮತ್ತು ಮನೆಯ ಮಕ್ಕಳಾದಿ ಎಲ್ಲರಿಗೂ "ಭ್ರಣಾಗ್"ನ್ನು ಬಿಸಿ ನೀರಲ್ಲಿ ಕದಡಿಸಿ ಬರಿ ಹೊಟ್ಟೆಗೆ ಒಂದೊಂದು ಔನ್ಸು ಮತ್ತು ತಾಜಾ ಹಸಿ ನೀರುಳ್ಳಿ ಹೋಳುಗಳು ಸ್ವಲ್ಪ ತಿನ್ನಲಿಕ್ಕೆ ಕೊಟ್ಟೆ

ಹನ್ನೊಂದನೇ ದಿನ ಕಡೇ ನೀರ ಸ್ನಾನ ಮಾಡಿಸಿ, ಆ ದಿನದಿಂದಲೇ ಮೈಗೆಲ್ಲಾ ಹಾಲಿನ ಕೆನೆ ತಿಕ್ಕುವಂತೆ ಮಾಡಿದೆ. ಇದರಿಂದ ಕೇ ದಿನಗಳಲ್ಲೆ ಸ್ವಲ್ಪಮಾತ್ರ ಉಳಿದ ಸಿಡುಬು ಕಲೆಗಳು ಒಂದೇ ಒಂದು ಇಲ್ಲದಂತೆ ಮಾಯವಾದವು.

ಮೈಯಲ್ಲಿ ಸಪೂರ ಇದ್ದವಳು 1969ರಲ್ಲಿ ಮದುವೆಯಾಗಿ ಮೈಯಲ್ಲಿ ದಪ್ಪ ಪುಷ್ಟವಾದಳು, 2 ಮಕ್ಕಳ ತಾಯಿಯಾಗಿ ಈಗ ಲಂಡನ್ನಿನಲ್ಲಿ ಗಂಡ, ಮಕ್ಕಳೊಡನೆ ಸುಖವಾಗಿರುವಳು.

ಈ ಚಿಕಿತ್ಸಾ ಸಮಸ್ಯೆ ಪವಾಡ-ಆಗಿನಿಂದಲೂ ಇದರ ಮೂಲಕಾರಣ, ಪೂರ್ಣ ಮಾಹಿತಿ ಪಡೆಯುವ ಹಂಬಲ ಉಂಟಾಗಿತ್ತು. ಕರ್ಮ ಧರ್ಮ ಸಂಯೋಗವೆಂಬಂತೆ ಹರಿದ್ವಾರಕ್ಕೆ ಬಂದೊಡನೆ ಅಮುಕಿಟ್ಟೆ ಹಂಬಲಕುಕ್ಕಿತು ಹರಿದ್ವಾರದಲ್ಲಿ 2 ಸರಕಾರಿ ಆಯುರ್ವೇದ ಕಾಲೇಜುಗಳವೆ. ಉತ್ತಮ ಪುಸ್ತಕ ಸಂಗ್ರಹ, ನುರಿತ ವಿದ್ವಾಂಸರ ಸಮೂಹವೇ ಸಿಕ್ಕಿತು. ರುದ್ರಾಕ್ಷೆ-ವಿಕ್ರಿತ ಮುಖ್ಯ ಕೇಂದ್ರ-ರುದ್ರಾಕ್ಷೆ ಧಾರಣ ಮತ್ತು ಅದರ ಪವಿತ್ರತೆ ಕುರಿತು ತಿಳುವಳಿಕೆಯುಳ್ಳ ಸಂನ್ಯಾಸಿಗಳ ತವರೂರೆಂಬಂತಿದೆ. ಆದಾಗಿ ಇದರ ಸದುಪಯೋಗ ಪಡೆದು ಇಂಗಿತ ಪೂರ್ಣಗೊಳಿಸಿದೆ. ಆ ಸಂಗ್ರಹವೇ ಈ ರುದ್ರಾಕ್ಷ ಮಹಾತ್ಮೆ ಪುಸ್ತಕ.

ಈ ಸಂದರ್ಭ ಏಕ ಮುಖಿಯಿಂದ ಚತುರ್ದಶ ಮುಖಿಗಳವರೆಗೂ ಮತ್ತು ಅವುಗಳಲ್ಲಿಯ ಭೇದ, ಜಾತಿ, ವರ್ಣ ಇತ್ಯಾದಿ ಪ್ರತ್ಯಕ್ಷ ಅನುಭವವೂ ಶ್ರೀ ಸ್ವಾಮಿ ಆನಂದಾನಂದ ಮತ್ತು ಕೆಲ ಸನ್ಯಾಸಿಗಳಿಂದ ಪಡೆದು ಸಪ್ತ-ಮುಖಿಗಳವರೆಗೆ ರುದ್ರಾಕ್ಷ ಸಂಗ್ರಹವನ್ನು ಮಾಡಿದೆ. ಆ ಬಳಿಕದವುಗಳ ಕ್ರಯ ನನ್ನ ಕೈ ಎಟುಕದಂತಿದ್ದುದರಿಂದ ಅವುಗಳ ಪ್ರತ್ಯಕ್ಷಿಕ ದರ್ಶನದ ಅನುಭವ ಮಾತ್ರ ಪಡೆದೆ.

ರುದ್ರಾಕ್ಷಗಳಲ್ಲಿ ನಕಲಿ ಬಹಳಷ್ಟಿದೆ. ರುದ್ರಾಕ್ಷ ವಿಕ್ರತದಲ್ಲೂ ಸುಲಿಗೆ ಕಂಡೆ. ಅದು ತರವಲ್ಲವೆಂದು ಯಾರಿಗೆ ಹೇಳಲಿ, ಹೇಗೆ ಹೇಳಲಿ ? ಆ ಕುರಿತು ನಾವೇ ಮನಗಂಡು ಸುಲಿಗೆ ಯಾ ನಕಲಿಗೆ ಸಿಗದೆ ಹೊಂದಿಸಿ ಕೊಳ್ಳಬೇಕು. ಸಾಚಾ ರುದ್ರಾಕ್ಷಿಯಲ್ಲಿ ಶಕ್ತಿ ಇರುವುದೆಂಬಂದು ಶತ ಸಿದ್ಧ ಅನುಭವ.

ರುದ್ರಾಕ್ಷಿಯ ಕುರತ ಅನುಭವ ಸದುಪಯೋಗ ನಮ್ಮ ಕನ್ನಡ-ನಾಡಿಗೂ ಲಭಿಸಲೆಂದು (ಹೆಚ್ಚಿಗೆ ತಿಳಿದವರಿರಬಹುದು) ಈ ಹೊತ್ತಗೆ ಹೊರತಂದೆ. ಇದಕ್ಕೆ ನನಗೆ ನೆರವಾದ ಡಾ|| ಭಾರದ್ವಾಜ, ಯೋಗ ಪ್ರಾಧ್ಯಾಪಕ, ಗುರುಕುಲ ಕಾಂಗಡಿ ವಿಶ್ವವಿದ್ಯಾಲಯ, ಹರಿದ್ವಾರ, ಸ್ವಾಮಿ ಆನಂದಾನಂದ, ಕಾರ್ತಿಕೇಯ ಆಶ್ರಮ, ಸಾಧುಬೇಲಾ, ಹರಿದ್ವಾರ, ಪಂಡಿತ ಅಶೋಕ ತಿವಾರಿ, ಬ್ರಹ್ಮವರ್ಚಸ್, ಹರಿ-ದ್ವಾರ. ಇವರಿಗೆಲ್ಲಾ ಹಾರ್ದಿಕವಾಗಿ ಈ ಸಂದರ್ಭ ಧನ್ಯವಾದಗಳನ್ನ-ರ್ಪಿಸುತ್ತೇನೆ.

ಈ "ರುದ್ರಾಕ್ಷ ಮಹಾತ್ಮೆ ಪುಸ್ತಕ ರೂಪದಲ್ಲಿ ನನ್ನ ಆಪ್ತ ಮಿತ್ರ ಡಾ| ಪಿ.ಆರ್. ಸೀತಾರಾಂ, ಶ್ರೀ ಸೀತಾರಾಘವ ವೈದ್ಯಶಾಲಾ, ಮೈಸೂರು, ಇವರು ಉದಾರ ಮನಸ್ಸಿನಿಂದ ಮುದ್ರಿಸಿಯೂ ಕೊಟ್ಟರು. ಈ ಋಣ ಮರೆಯುವಂತಿಲ್ಲ. ಹಾಗೂ ಅವರ ಈ ಕುರಿತಾದ ಮುನ್ನುಡಿ ಇದರ ಕುರಿತಾದ ಅಭಿಮಾನದ ದ್ಯೋತಕ. ಇದಕ್ಕಾಗಿ ಡಾ| ಪಿ. ಆರ್. ಸೀತಾರಾಮರ ಉಪಕಾರ ಸ್ಮರಣೆ ಮಾಡಿ ಅವರಿಗೆ ಅನಂತ ಧನ್ಯವಾದಗಳನ್ನರ್ಪಿಸುತ್ತೇನೆ.

ಇತಿ

ಕ. ರಾ. ಪುರಾಣಿಕ

# ರುದ್ರಾಕ್ಷ ಮಹಾತ್ಮೆ

ಉಪಕ್ರಮಣಿಕೆ :

1. ಉಪನಿಷದುಗಳಲ್ಲಿ, ಸನ್ಯಾಸಶಾಸ್ತ್ರಗಳಲ್ಲಿ ರುದ್ರಾಕ್ಷ ಮಹಾತ್ಮೆ
2. ಶಿವೋಪಾಸನೆಯಲ್ಲಿ ರುದ್ರಾಕ್ಷಮಹತ್ವ-ಧಾರಣಾಕ್ರಮ ಇತ್ಯಾದಿ
3. ಶಿವರತ್ನ ಕೇಂದ್ರ ಮಾಹಿತಿಯಿಂದ.
4. ಆಯುರ್ವೇದ ವೈದ್ಯಕೀಯ ರೀತ್ಯಾ ರುದ್ರಾಕ್ಷ ಮಹತ್ವ
5. ವಿದೇಶಗಳಲ್ಲಿ ಶಿವ ಮಂದಿರಗಳು

---

# ರುದ್ರಾಕ್ಷ ಮಹಾತ್ಮೆ

## ಸನ್ಯಾಸ ಶಾಸ್ತ್ರಗಳಲ್ಲಿ

ಸನ್ಯಾಸಿಗಳು ರುದ್ರಾಕ್ಷ ಧಾರಣೆ ಮಾಡುವುದು ಉಚಿತವೆಂದು ಹೇಳಲ್ಪಟ್ಟಿದೆ. ಈ ಶಾಸ್ತ್ರೀಯ ಮಹತ್ವ ಒಂದು ಬದಿ ಇಡೋಣ. ಶ್ರದ್ಧಾ ವಿಚಾರ ತತ್ವಗಳಿಂದ ವಿಚಾರ ಮಾಡದೆ ವೈಜ್ಞಾನಿಕ ದೃಷ್ಟಿಯಿಂದ ನೋಡಿದರೂ ಇದರ ಶಾಸ್ತ್ರೀಯ ವಿಧಾನದ ರಹಸ್ಯ ನಮ್ಮ ತಿಳುವಳಿಕೆಗೆ ಬರುತ್ತದೆ.

ರುದ್ರಾಕ್ಷವು ಒಂದು ದಿವ್ಯ ಔಷಧ. ಅದು ತನ್ನ ಸಾನ್ನಿಧ್ಯ ಮಾತ್ರದಿಂದ ಅನೇಕ ಶಾರೀರಿಕ ರೋಗಗಳನ್ನು ಮತ್ತು ವಾಯು ವಿಕಾರಗಳನ್ನು ನಷ್ಟಮಾಡುತ್ತದೆ. ರುದ್ರಾಕ್ಷಿಯಲ್ಲಿ ವಾತಹರ ಗುಣವಿದೆ. ಯಾರ ದೇಹದಲ್ಲಿ ಪ್ರತಿಕ್ಷಣ ರುದ್ರಾಕ್ಷಿಯ ಸ್ಪರ್ಶನವಾಗುವುದೋ ಅವರಿಗೆ ವಾತಬಾದೆ ತಟ್ಟುವುದಿಲ್ಲ. ಅದಾಗಿ ಸನ್ಯಾಸಿಗಳು ಅವರ ದೈಹಿಕ ಸ್ವಾಸ್ಥ್ಯ ಕುರಿತು ಉದಾಸೀನರಿರುತ್ತಾರೆ. ಹಾಗಾಗಿ ಅವರ ರೋಗನಿವಾರಣೆ ಮಾಡಲು ಆಯುರ್ವೇದ ಮುನಿಷ್ಯರು ಅವರಿಗೆ ರುದ್ರಾಕ್ಷಧಾರಣ ಅವಶ್ಯವೆಂದು ಹೇಳಿದರು. ಹೇಗೆ ಬ್ರಹ್ಮಚಾರಿಗಳಿಗೆ ಮುಂಜಿ (ಅತಿ ಘಟ್ಟಿ ಬಲವುಳ್ಳ ಮುಂಜ ಎಂಬ ತೃಣ-ಉಪನಯನ ಸಂದರ್ಭ ಇದರ ಹಗ್ಗ

ಮಾಡಿ ಸೊಂಟಕ್ಕೆ ಕಟ್ಟುತ್ತಿದ್ದರು. ಹಾಗಾಗಿ ಉಪನಯನ ಸಂಸ್ಕಾರಕ್ಕೆ-ಮುಂಜಿ ಎಂಬ ಹೆಸರು ಬಂದಿದೆ)-ಬ್ರಹ್ಮಚಾರಿಗಳ ಅವಶ್ಯ ಹೇಗೆ ಮಹತ್ವಪೂರ್ಣವಾದುದೋ ಹಾಗೆ ಸನ್ಯಾಸಿಗಳಿಗೆ ರುದ್ರಾಕ್ಷ ಧಾರಣೆ ಮಹತ್ವಪೂರ್ಣವಾಗಿದೆ. ಸನ್ಯಾಸಿಗಳ ದೇಹವು ಮಳೆ-ಬಿಸಿಲು, ಅನುಚಿತ ಆಹಾರ-ವಿಹಾರಗಳಿಂದ ರೋಗ ಗ್ರಸ್ತವಾಗುವಂತಿದೆ. ಅವರ ಯೋಗಕ್ಷೇಮಗಳ ದಾಯಿತ್ವ ಅವರಿಗೆ ಬಿಟ್ಟಿಲ್ಲ. ಅವರ ದಾಯಿತ್ವ "ಸನ್ಯಾಸ ಶ್ರುತಿ" ಯದ್ದಾಗಿದೆ. ಅದಕ್ಕಾಗಿ ಶ್ರುತಿಗಳು ಸನ್ಯಾಸಿಗಳಿಗೆ ಅನಾ-ಯಾಸ ಸ್ವಸ್ಥವಿಡುವುದಕ್ಕೆ ರುದ್ರಾಕ್ಷಧಾರಣೆ ಉಪದೇಶ ಮಾಡಿದೆ.

ಔಷಧಗಳ ಪ್ರಭಾವ ಉಪೇಕ್ಷೆ ಮಾಡಬಾರದು. ಸ್ವಾಮಿ ದಯಾನಂದರೂ ಸೀಮಂತ ಸಂಸ್ಕಾರದಲ್ಲಿ ಪತ್ನಿಯ ಕೂದಲನ್ನು ಖದಿರ (ಕಾಚು) ಮರದ ಬಾಚಣಿಗೆಯಿಂದ ಪ್ರಸಾದನ ಮಾಡಬೇಕೆಂದಿರುವರು. ಅದೇ ತರ ಈ ರಹಸ್ಯ ಸಮಾಧಾನ ರುದ್ರಾಕ್ಷ ಕುರಿತೂ ತಿಳಿಯಬೇಕಾಗಿದೆ. ರುದ್ರಾಕ್ಷ ಧಾರಣೆಯ ಮೂರನೆ ರಹಸ್ಯವೆಂದರೆ ರುದ್ರಾಕ್ಷ ಮುಳ್ಳು ಮುಳ್ಳಿನಂತಾಗಿದ್ದು-ಕಠಿಣತೆ ಹಾಗೂ ಮೃದುತ್ವ ದಿಂದಲೂ ಕೂಡಿದೆ. ಇದರಿಂದ ಸನ್ಯಾಸಿಗಳಿಗೆ ರಾತ್ರಿ ಸರಿ-ಯಾಗಿ ನಿದ್ರೆಮಾಡಲು ಬರುವುದಿಲ್ಲ. ರುದ್ರಾಕ್ಷ ಗಂಟುಗಳು ಚುಚ್ಚುತ್ತಿರುತ್ತವೆ. ಆದರಿಂದ ಸನ್ಯಾಸಿಗಳು ಮಲಗಿದ್ದರೂ ಎಚ್ಚರದಂತಿರುತ್ತಾರೆ. ಸ್ವಪ್ನಾವಸ್ಥೆಯಲ್ಲಿ ಚಂಚಲ ಮನ ಕಳ್ಳದಾರಿಯಿಂದ ನುಗ್ಗಿ ಯೋಗಿಯನ್ನು ದುರ್ಬಲ

ರಾಗಲು ಬಿಡುವುದಿಲ್ಲ. ಆದಾಗಿ ಪ್ರಾಣಿಗಳೆಲ್ಲವೂ ರಾತ್ರಿ ಸುಖ ನಿದ್ರೆ ಮಾಡುತ್ತಿದ್ದರೂ ಸಂಯಮಿ ಸನ್ಯಾಸಿಗಳು ಜಾಗೃತರಿರಬೇಕು.

ಯಾ ನಿಶಾ ಸರ್ವಭೂತಾನಾಂ ತಸ್ಯಾಂಜಾಗೃತಿ ಸಂಯಮಿ ।
ಯಸ್ಯಾಂಜಾಗೃತಿ ಭೂತಾನಿ ಸಾನಿಶಾ ಪಶ್ಯತೋ ಮುನಃ ॥
(ಗೀತೆ-2-69)

ಆದುದರಿಂದ ಯೋಗಿಗೆ ರುದ್ರಾಕ್ಷಿ ಅವಶ್ಯವೆಂದು ಹೇಳಿದೆ.

ರುದ್ರನ ಕಣ್ಣಿನಿಂದ ಇದು ಉತ್ಪನ್ನವಾದುದರಿಂದ ಇದಕ್ಕೆ "ರುದ್ರಾಕ್ಷ" ಎಂದು ಹೆಸರು ಬಂತು.

ರುದ್ರಸ್ಯ ನಯನಾದುತ್ಪನ್ನಾ ರುದ್ರಾಕ್ಷಾ ಇತಿ ಲೋಕೆ ಖ್ಯಾಯಂತೆ-॥ರುದ್ರಾಕ್ಷಜಾಬಾಲೋ-ಬ್ರಹ್ಮಜಾಬಾಲೋ॥

ರುದ್ರಾಕ್ಷ ಮಹತ್ವ ಹೇಳುವುದಾದರೆ—

ರುದ್ರಾಕ್ಷವಿಚಾರ ಬಾಯಿಂದ ಉಚ್ಚರಿಸಿದರೆ ಹತ್ತು, ಸ್ಪರ್ಶದಿಂದ ಎರಡು ಸಾವಿರ, ಕಿವಿಗಳಲ್ಲಿ ಧಾರಣೆ ಮಾಡಿದರೆ ಹನ್ನೊಂದು ಸಹಸ್ರ, ತಲೆಯಲ್ಲಿ ಧಾರಣೆಮಾಡಿದರೆ ಒಂದು ಕೋಟಿ ಗೋದಾನ ಮಾಡಿದ ಪುಣ್ಯ ಪ್ರಾಪ್ತಿ.

ತದ್ರುಕ್ಷೆ ವಾಗ್ವಿಯ ಕೃತೆ ದಶಗೋದದಾನೇನ ಯತ್ಫಲ-
ಮವಾಪ್ನೋತಿ ತತ್ಫಲ ಮಶ್ನುತೆ ಸ ಏವ ಭಸ್ಮಜ್ಯೋತಿ
ರುದ್ರಾಕ್ಷ
ಇತಿ ತದ್ರುದ್ರಾಕ್ಷಂ ಕರೇಣ ಸ್ಪೃಷ್ಟ್ವಾ ಧಾರಣ

ಮಾತ್ರೇಣ ದ್ವಿ ಸಹಸ್ರ ಗೋಪ್ರದಾನ ಫಲಂ ಭವತಿ ।
ತದ್ರುದ್ರಾಕ್ಷೇ ಕರ್ಣಯೋರ್ಧಾರ್ಯಮಾಣೇ ಏಕಾದಶ
ಸಹಸ್ರ ಗೋಪ್ರದಾನ ಫಲಂ ಭವತಿ ಏಕಾದಶ ರುದ್ರತ್ವಂ
ಚಗಚ್ಛತಿ । ತದ್ರುದ್ರಾಕ್ಷೇ ಶಿರಸಿ ಧಾರ್ಯಮಾಣೇ
ಕೋಟಿ ಗೋಪ್ರದಾನ ಫಲಂ ಭವತಿ ॥ ಪಡಿ

ಚತುರ್ವರ್ಣದವರಿಗೆ ಚತುರ್ವಿಧ ರುದ್ರಾಕ್ಷಿ :-

ಬ್ರಾಹ್ಮಣರಿಗೆ-ಬಿಳಿ ರುದ್ರಾಕ್ಷ, ಕ್ಷತ್ರಿಯರಿಗೆ-ಕೆಂಪು, ವೈಶ್ಯರಿಗೆ-ಹಳದಿ, ಶೂದ್ರರಿಗೆ-ಕಪ್ಪು ರುದ್ರಾಕ್ಷ ಧಾರಣ ಹೇಳಿದೆ:

ಶ್ವೇತಾಸ್ತು ಬ್ರಾಹ್ಮಣಾ ಜ್ಞೇಯಾ ಕ್ಷತ್ರಿಯಾ ರಕ್ತ
ವರ್ಣಕಾಃ ।
ಪೀತಾಸ್ತು ವೈಶ್ಯಾ ವಿಜ್ಞೇಯಾ ಕೃಷ್ಣಾ ಶೂದ್ರಾ
ಉದಾಹೃತಾಃ ॥ (ರುದ್ರಾಕ್ಷ ಜಾಬಾಲೋ: 10)

ರುದ್ರಾಕ್ಷ ಏಕಮುಖಿಯಿಂದ ಚತುರ್ದಶ ಮುಖಿವರೆಗಿದೆಯೆಂಬ ವರ್ಣನೆ ಜಾಬಾಲೋಪನಿಷದ್‌ನಲ್ಲಿ ಹೇಳಿದೆ.

ರುದ್ರಾಕ್ಷಿ ಧಾರಣೆ ವಿಷಯದ ಫಲಪ್ರಾಪ್ತಿ ಕುರಿತು ಯೋಗ್ಯ ಹೇಳಿಕೆ ಇದೆ. ಮಹತ್ವ ಕುರಿತು ಪ್ರತಿಪಾದನೆ ಇದೆ. (ಮುಂದಿನ ಲೇಖನದಲ್ಲಿದೆ) ಪೂರ್ಣಸಿದ್ಧ ಯೋಗಿಗಳಿಗೆ ಇದರ ಅವಶ್ಯ ಬೀಳುವುದಿಲ್ಲ. ಆದರ ಪ್ರಾರಂಭದವರ ಪವಿತ್ರತೆಯ ಭಾವನೆಗಾಗಿ ಅಗತ್ಯ. ರುದ್ರಾಕ್ಷವು ಹೃದಯ ಹಾಗೂ ರಕ್ತಚಲನೆಯ ಸಾಮಾನ್ಯಸ್ಥಿತಿ ತರುವಲ್ಲಿ ಔಷಧ

ರೂಪವಾಗಿ ಆಯುರ್ವೇದಶಾಸ್ತ್ರದಲ್ಲಿ ರುದ್ರಾಕ್ಷ ಪ್ರಯೋಗವು ಮಹತ್ವವೆಂದಿದೆ.

## ಶಿವಾಸೋಪಾಸನೆಯಲ್ಲಿ ರುದ್ರಾಕ್ಷ ಮಹತ್ವ—

(ಕಲ್ಯಾಣ ವಿಶೇಷಾಂಕ-ಶಿವಾಸೋಪಾನಾಂಕ-355)

### ರುದ್ರಾಕ್ಷಿ ಉತ್ಪತ್ತಿ :

"ರುದ್ರಸ್ಯ-ಅಕ್ಷಿ ರುದ್ರಾಕ್ಷಃ, ಅಕ್ಷ್ಯಿಫಲಾಕ್ಷಿತಂ ಅಶ್ರು ತಂಜನ್ಯಃ ವೃಕ್ಷಃ" ಅರ್ಥಾತ್ ಶಂಕರನಕಣ್ಣೀರಿನಿಂದ ಉತ್ಪನ್ನ ವೃಕ್ಷ ರುದ್ರಾಕ್ಷ. ಶ್ರೀಮದ್ದೇವಿ ಭಾಗವತದಲ್ಲಿ ಈಕುರಿತು ಒಂದು ಕಥೆ ಹೇಳಿದೆ. ಒಂದು ಸಲ ಅಶುತೋಷ ಭಗವಾನ್ ಶಂಕರನು ದೇವತೆಗಳ ಹಾಗೂ ಮನುಷ್ಯರ ಹಿತಕ್ಕಾಗಿ ತ್ರಿಪುರಾಸುರ ವಧೆ ಮಾಡಬೇಕೆಂದೆಣಿಸಿ ಒಂದು ಸಾವಿರ ವರ್ಷ ತಪಸ್ಸು ಮಾಡಿದ ಹಾಗೂ ಅಘೋರಾಸ್ತ್ರದ ಚಿಂತನೆ ಮಾಡಿದ. ಆಗ ಭಗವಂತನ ಕಣ್ಣಿನಿಂದ ಅಶ್ರು ಬಿಂದು (ಕಣ್ಣೀರು) ಉದುರಿ ಬಿತ್ತು. ಅದೇ ಕಣ್ಣೀರು ರುದ್ರಾಕ್ಷಿ ಮರವಾಗಿ ಬೆಳೆಯಿತು.

ರುದ್ರಾಕ್ಷ ಉತ್ಪತ್ತಿಯು ಗೌಡ ದೇಶದಲ್ಲಾಯಿತು. ಆ ಬಳಿಕ ಮಥುರಾ, ಅಯೋಧ್ಯಾ, ಲಂಕಾ, ಮಲಯ, ಸಹ್ಯಾದ್ರಿ ಮತ್ತು ಕಾಶಿಯಲ್ಲಿ ಉತ್ಪನ್ನವಾಗಲಾರಂಭಿಸಿತು.

## ರುದ್ರಾಕ್ಷ ವರ್ಣ ಮತ್ತು ಧಾರಣೆಯ ಅಧಿಕಾರ

ರುದ್ರಾಕ್ಷವು ನಾಲ್ಕು ವರ್ಣಗಳಲ್ಲಿದೆ. ಬಿಳಿ, ಕೆಂಪು ಹಳದಿ ಮತ್ತು ಕೃಷ್ಣ ವರ್ಣಗಳಲ್ಲಿದೆ. ಈ ಪ್ರಕಾರ ಬ್ರಾಹ್ಮಣರಿಗೆ ಬಿಳಿ, ಕ್ಷತ್ರಿಯರಿಗೆ ಕೆಂಪು, ವೈಶ್ಯರಿಗೆ ಹಳದಿ ಮತ್ತು ಶೂದ್ರರಿಗೆ ಕೃಷ್ಣ ವರ್ಣದ್ದೆಂದು ಹೇಳಿದೆ.

ಸರ್ವಾಶ್ರಮಾಣಾಂ ವರ್ಣಾನಾಂ ಸ್ತ್ರೀ ಶೂದ್ರಾಣಾಂ ।
ಶಿವಾಜ್ಞಯ ಧಾರ್ಯಾ ಸದೈವ ರುದ್ರಾಕ್ಷಾಃ ॥

ಶಿವ ಪುರಾಣ (ವಿದ್ಯೇ-25-47)

ಎಲ್ಲಾ ಆಶ್ರಮ, ವರ್ಣಗಳವರೂ ಸ್ತ್ರೀ ಮತ್ತು ಶೂದ್ರರೂ ಸರ್ವರೂ ರುದ್ರಾಕ್ಷ ಧಾರಣ ಮಾಡಬೇಕೆಂದು ಶಿವನ ಆಜ್ಞೆ ಇದೆ.

## ರುದ್ರಾಕ್ಷ ಮುಖಿಗಳು ಮತ್ತು ಧಾರಣೆಯ ವಿಧಿ :

ಶಾಸ್ತ್ರಗಳಲ್ಲಿ ಏಕ ಮುಖಿಯಿಂದ ಚತುರ್ದಶ (ಹದಿನಾಲ್ಕು)ಮುಖಿಗಳವರೆಗೆ ವರ್ಣನೆ ಪ್ರಶಂಸೆ ಮಾಡಲ್ಪಟ್ಟಿದೆ.

ರುದ್ರಾಕ್ಷದಲ್ಲಿ ಎರಡು ವಿಧ- ರುದ್ರಾಕ್ಷ ಮತ್ತು ಭದ್ರಾಕ್ಷ ವೆಂದು.

"ರುದ್ರಾಕ್ಷಾಣಾಂ ತು ಭದ್ರಾಕ್ಷಃ ಸ್ಯಾನ್ಮಹಾಫಲಂ"

ರುದ್ರಾಕ್ಷೆಯ ಮಧ್ಯ ಭದ್ರಾಕ್ಷ ಧಾರಣವೂ ಮಹಾ ಫಲದಾಯಕ ವೆಂದಿದೆ.

ರುದ್ರಾಕ್ಷೆಯಲ್ಲಿ ಸ್ವಯಂ ತೂತು ಉಂಟಾಗುತ್ತದೆ:

ಸ್ವಯಮೇವ ಕೃತಂ ದ್ವಾರಂ ರುದ್ರಾಕ್ಷಸ್ಯಾದಿ
ಹೋತ್ತಮಮ್ ।
ಯತ್ರ ಪುರೂಷಯತ್ನೇನ ಕೃತಂ ತನ್ಮಧ್ಯಮಂ
ಭವೇತ್ ॥
(ರುದ್ರಾಜಾಬಾಲೋ 22-23)

ಸ್ವಯಂ ತೂತುಳ್ಳ ರುದ್ರಾಕ್ಷಿ ಉತ್ತಮ. ತೂತು ಮಾಡಿದ್ದು ಮಧ್ಯಮ.

ಏಕಮುಖಿ :

ಏಕವೃತ್ರಂತು ರುದ್ರಾಕ್ಷಂ ಪರತತ್ವ ಸ್ವರೂಪಕಂ ।

ಅರ್ಥಾತ್ : ಏಕಮುಖಿ ರುದ್ರಾಕ್ಷ-ಸಾಕ್ಷಾತ್ ಶಿವ ಪರತತ್ವ (ಪರಬ್ರಹ್ಮ) ಸ್ವರೂಪವಾಗಿದೆ. ಹಾಗೂ ಪರತತ್ವ ಪ್ರಕಾಶಕವೂ ಆಗಿದೆ.

ಬ್ರಹ್ಮ ಹತ್ಯಾ ವ್ಯಪೋಹತಿ (ದೆ.ಭಾ. 22-4)

ಬ್ರಹ್ಮಹತ್ಯಾ ದೋಷ ನಿವಾರಕ.

ಇದರ ಧಾರಣ ಮಂತ್ರ : ॥ ಓಂ ಹ್ರೀಂ ನಮಃ ॥

ದ್ವಿಮುಖಿ :

ದ್ವಿವತ್ರಂ ತು ಮುನಿಶ್ರೇಷ್ಠ ಚಾರ್ಧ
ನಾರೀಶ್ವರಾತ್ಮಕಮ್ ॥

ಇದು ಅರ್ಧನಾರೀಶ್ವರವಾಗಿದೆ. ಇದರ ಧಾರಣೆ ಯಿಂದ ಶಿವ-ಪಾರ್ವತಿಯರು ಪ್ರಸನ್ನರಾಗುವರು-

ಧಾರಣಾ ಮಂತ್ರ । ಓಂ ನಮಃ ।

( ಕೃಷಿಉದ್ದಮರಿಗೆ ಇದರ ಧಾರಣೆ ಶ್ರೇಷ್ಠವು )

**ತ್ರಿಮುಖಿ :**

ತ್ರಿಮುಖಂ ಚೈವ ರುದ್ರಾಕ್ಷಮಗ್ನಿ ತ್ರಯ
ಸ್ವರೂಪಕಮ್ ॥

ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿಗಳ ಸ್ವರೂಪವಾಗಿದೆ. ಇದರ ಧಾರಣೆಯಿಂದ ಐಶ್ವರ್ಯ ಪ್ರಾಪ್ತಿ ಉಂಟಾಗುತ್ತದೆ.

ಧಾರಣಾ ಮಂತ್ರ ॥ ಓಂ ಕ್ಲೀಂ ನಮಃ ।

**ಚತುರ್ಮುಖಿ :**

ಚತುರ್ಮುಖಂತು ರುದ್ರಾಕ್ಷಂ ಚತುರ್ವಕ್ತ್ರ
ಸ್ವರೂಪಕಮ್ ॥

ಚತುರ್ಮುಖಿ ರುದ್ರಾಕ್ಷಿ ಸಾಕ್ಷಾತ್ ಬ್ರಹ್ಮನ ಪ್ರತೀಕ. ಇದರ ಧಾರಣೆಯಿಂದ ಸಂತತಿ ಪ್ರಾಪ್ತಿ ಉಂಟಾಗುತ್ತದೆ.

ಧಾರಣಾ ಮಂತ್ರ ಓಂ ಹ್ರೀಂ ನಮಃ ।

**ಪಂಚಮುಖಿ :**

ಪಂಚವಕ್ತ್ರಂ ತು ರುದ್ರಾಕ್ಷಂ ಪಂಚಬ್ರಹ್ಮ
ಸ್ವರೂಪಕಮ್ ॥

ವಿಷ್ಣು, ಶಿವ, ಗಣೇಶ, ಸೂರ್ಯ ಮತ್ತು ದೇವಿಯ ಸ್ವರೂಪವಾಗಿದೆ. ಇದರ ಧಾರಣೆಯಿಂದ ನರಹತ್ಯಾ ದೋಷ-ಪಾಪ ನಿವಾರಣೆ.

ಇದರ ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

**ಷಣ್ಮುಖಿ :**

ಷಡ್ವಕ್ತ್ರಮಪಿ ರುದ್ರಾಕ್ಷಂ ಕಾರ್ತಿಕೇಯಾದಿ
ದೈವತಮ್ ॥

ಆರುಮುಖದ ರುದ್ರಾಕ್ಷಿ ಸಾಕ್ಷಾತ್ ಕಾರ್ತಿಕೇಯ ಸ್ವರೂಪ; ಇದರ ಧಾರಣೆಯಿಂದ ಆರೋಗ್ಯ ಪ್ರಾಪ್ತಿ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

**ಸಪ್ತಮುಖಿ :**

ಸಪ್ತವಕ್ತ್ರೋ ಮಹಾಭಾಗೋ ಹ್ಯನಂಗೋ ನಾಗ
ನಾಮತಃ॥

ಇದು ಅನಂಗವೆಂಬ ಹೆಸರುಳ್ಳದ್ದು ಧಾರಣೆಯಿಂದ ಸ್ವರ್ಣಸ್ತೇಯಾ-ಸ್ವರ್ಣಚೋರಿ ಪಾಪದಿಂದ ಮುಕ್ತರಾಗುತ್ತಾರೆ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

**ಅಷ್ಟಮುಖಿ :**

ಅಷ್ಟವಕ್ತ್ರೋ ಮಹಾದೇವಃ ಸಾಕ್ಷಾದ್ದೇವೋ
ವಿನಾಯಕಃ ॥

ಆದಾಗಿ ಎಂಟು ಮುಖದ ರುದ್ರಾಕ್ಷಿಯು ಸಾಕ್ಷಾತ್ ವಿನಾಯಕರ ಪ್ರತೀಕ. ಧಾರಣೆಯಿಂದ ವಿಘ್ನ ಬಾಧೆಗಳು ನಿವೃತ್ತಿ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

**ನವಮುಖಿ :**

ನವವಕ್ತ್ರಂತು ರುದ್ರಾಕ್ಷಂ ನವಶಕ್ತ್ಯಾಧಿದೈವತಮ್।

ಧಾರಣೆಯಿಂದ ಒಂಬತ್ತು ವಿಧ ಶಕ್ತಿಗಳುಂಟಾಗುತ್ತವೆ. ಇದು ದುರ್ಗೆಯ ಪ್ರತೀಕ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

**ದಶಮುಖಿ :**

ದಶವಕ್ತ್ರಂತು ದೇವೇಶಃ ಸಾಕ್ಷಾದ್ ದೇವೋ
ಜನಾರ್ದನಃ ।

ಇದು ಸಾಕ್ಷಾತ್ ಜನಾರ್ದನ ಪ್ರತೀಕ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

ಪೂರ್ಣಾಯುಷ್ಕಾರಕ ಹಾಗೂ ಶಾಂತಿಪ್ರದ.

**ಏಕಾದಶ :**

ಏಕಾದಶಮುಖಂ ತ್ವಕ್ಷಂ ರುದ್ರೈಕಾದಶ ದೈವತಂ
(ರುದ್ರಾಕ್ಷ ಜಾಬಾಲೋಪ)

ಏಕಾದಶ ಮುಖೋ ಯಸ್ತು ರುದ್ರಾಕ್ಷಃ ಪಾಪನಾಶನಃ ।
ಸರುದ್ರೋ ಧಾರಣಾತ್ ತಸ್ಯ ಸರ್ವತ್ರ ವಿಜಯೀ ಭವೇತ್॥
(ಶಿ. ಪು. ವಿ. ಸಂ. 25-75)

ದ್ವಾದಶಮುಖಿ :

ರುದ್ರಾಕ್ಷ ದ್ವಾದಶ ಮುಖಂ ಮಹಾವಿಷ್ಣು ಸ್ವರೂಪಕಂ।
ದ್ವಾದಶಾದಿರೂಪಂ ಚ ಬಿಭರ್ತ್ಯೇವ ಹಿ ತತ್ಪರಮ್ ॥
(ರುದ್ರಾಕ್ಷ ಜಾಬಾಲ 24)

ಇದು ಸಾಕ್ಷಾತ್ ಮಹಾವಿಷ್ಣುವಿನ ಸ್ವರೂಪ. — ಇಷ್ಟಾರ್ಥ ಸಿದ್ಧಿದಾಯಕ.

ಧಾರಣ ಮಂತ್ರ ॥ ಓಂ ಹ್ರೀಂ ನಮಃ ॥

ತ್ರಯೋದಶ ಮುಖಿ

ತ್ರಯೋದಶ ಮುಖಂ ತ್ವಕ್ಷಂ ಕಾಮದಂ ಸಿದ್ಧಿದಂ ಶುಭಮ್ ।
ತಸ್ಯಧಾರಣ ಮಾತ್ರೇಣ ಕಾಮದೇವಃ ಪ್ರಸೀದತಿ ॥
(ರುದ್ರಾಕ್ಷ ಜಾಬಾಲ)

ಸಮಸ್ತ ಕಾಮನೆಗಳ ಪೂರ್ತಿದಾಯಕವಾಗಿದೆ.

ಚತುರ್ದಶ ಮುಖಿ :

ಚತುರ್ದಶ ಮುಖಂ ತ್ವಕ್ಷಂ ರುದ್ರನೇತ್ರ ಸಮುದ್ಭವಮ್।
ಸರ್ವವ್ಯಾಧಿ ಹರಂಚೈವ ಸರ್ವದಾರೋಗ್ಯ ಮಾಪ್ನುಯಾತ್ ॥

ಈ ರುದ್ರಾಕ್ಷ ಶಿವನ ಕಣ್ಣಿಂದ ಉತ್ಪನ್ನವಾದುದು. ಆದ್ದರಿಂದ ಭಗವಾನ್‌ನ ಕಣ್ಣಿನ ಸಮಾನವಾಗಿದೆ. ಸರ್ವ ವ್ಯಾಧಿ ಹರ.

ಇದರ ಧಾರಣ ಮಂತ್ರ : " ಓಂ ಹ್ರೀಂ ನಮಃ ।

ರುದ್ರಾಕ್ಷ ಧಾರಣೆ ಮಾಡಿದಾಗ—ವರ್ಜಿತ ಪದಾರ್ಥ :

ಮದ್ಯಂ ಮಾಂಸಂ ಚ ಲಸುಣಂ ಪಲಾಂಡುಂ ಶಿಗ್ರು
ಮೇವ ಚ
ಶ್ಲೇಷ್ಮಾಂತಕಂ ವಿಡ್ ವರಾಹಮ ಭಕ್ಷ್ಯಂ ವರ್ಜ-
ಯನ್ನರಃ ||(ರುದ್ರಾಕ್ಷಜಾಬಾಲಿ)

ರುದ್ರಾಕ್ಷವನ್ನು ಮಂತ್ರ ಪೂರ್ವಕ ಧಾರಣೆ ಮಾಡ ಬೇಕು.

ವಿನಾಮಂತ್ರೇಣ ಯಾಂ ದತ್ತೇ ರುದ್ರಾಕ್ಷಿ ಭುವಿ
ಮಾನವಃ ।
ಸ ಯಾತಿ ನರಕಂ ಘೋರಂ ಯಾವದಿಂದ್ರಶ್ಚತು-
ರ್ದಶಃ ||

ಹದಿನಾಲ್ಕು ಇಂದ್ರರ ಕಾಲದ ತನಕ ಘೋರ ನರಕ ಅನುಭವಿಸಬೇಕಾಗುವುದು ಎಂದಿದೆ.

ರುದ್ರಾಕ್ಷವನ್ನು ಶುಭ ಮುಹೂರ್ತದಲ್ಲಿ ಧಾರಣೆ ಮಾಡಿ:

ಗ್ರಹಣೇ ವಿಷುವೆ ಚೈವ ನಯನೇ ಸಂಕ್ರಮೇಪಿ ವಾ।
ದರ್ಶೇಷು ಪೂರ್ಣಮಾಸೆ ಚ ಪೂರ್ಣೇಶು ದಿವ-
ಸೇಷು ಚ ||
ರುದ್ರಾಕ್ಷಾ ಧಾರಣಾತ್ ಸದ್ಯಃ ಸರ್ವಪಾಪೈಃ
ವಿಮುಚ್ಯತೆ ||

ಗ್ರಹಣ ಕಾಲ, ವಿಷುಸಂಕ್ರಾಂತಿ, (ಮೇಷಾರ್ಕ ತಥಾ ತುಲಾರ್ಕ) ದಿನ, ಕರ್ಕಾಟಕ ಸಂಕ್ರಾಂತಿ, ಅಮಾವಾಸ್ಯೆ ಪೂರ್ಣಿಮಾ ಏವ ಪೂರ್ಣ ತಿಥಿಗಳಲ್ಲಿ ಧಾರಣೆ ಮಾಡಿ.

ಪ್ರಮಾಣ : ನೆಲ್ಲಿಕಾಯಿ ಪ್ರಮಾಣ ಉತ್ತಮ. ಬುಗುರಿ ಹಣ್ಣಿನ ಗಾತ್ರ ಮದ್ಯಮ; ಕಡಲೆ ಗಾತ್ರ ಕನಿಷ್ಟ. (ಇದು ಭುಕ್ಷುಂಕ ಋಷಿಗೆ ರುದ್ರನು ಹೇಳಿದ ವಿಚಾರ)

ಶಿವ ರತ್ನ ಧಾರ್ಮಿಕ ಮಾಸಿಕ.

550 ರುದ್ರಾಕ್ಷಗಳ ಮುಕುಟ, ಮೂರು ಲಡಿದಾರ 360 ರುದ್ರಾಕ್ಷಗಳ ಯಜ್ಞೋಪವೀತ, 101 ರುದ್ರಾಕ್ಷ ಗಳ ಮಾಲೆ, 3 ರುದ್ರಾಕ್ಷಿ ಜುಟ್ಟನಲ್ಲಿ, 6-6 ಕಿವಿಗಳಲ್ಲಿ, 12 ಎರಡೂ ರಟ್ಟೆಗಳಲ್ಲಿ, 2 ಬಂದನದಲ್ಲಿ, 3 ಜಂಘೆಗಳಲ್ಲಿ, 5 ಸೊಂಟದಲ್ಲಿ-ಈ ಪ್ರಕಾರ 11ನೂರು ರುದ್ರಾಕ್ಷ ಧಾರಣ ಮಾಡಿದವ ಸಾಕ್ಷಾತ್ ಶಿವ ಸ್ವರೂಪನಾಗುತ್ತಾನೆ.

ಸದಾಶಿವನು ಪಾರ್ವತಿಗೆ ಹೇಳುತ್ತಾನೆ:-"ಹೇ ದೇವಿ ರುದ್ರಾಕ್ಷ ನನಗೆ ಅತಿ ಪ್ರೀತಿ. ನನ್ನ ಆಜ್ಞೆಯೆಂದರೆ ಈ ಕಲ್ಯಾಣ ಕಾರಕ ಮಾಲೆಯನ್ನು ಯಾವ ವರ್ಣ ಯಾವ ಆಶ್ರಮದವರೂ ಧಾರಣ ಮಾಡ ಬಹುದು. ಇದರಿಂದ ರಾತ್ರಿ ಕೃತ ಪಾಪ ನಿವೃತ್ತಿ, ದಿವಸ ಕೃತ ಪಾಪ ರಾತ್ರೆ ಧಾರಣೆಯಿಂದ ನೀಗುವುದು. ಸ್ತ್ರೀ ಶೂದ್ರರೆಂಬ ಭೇದ ವಿಲ್ಲದೆ ಯಾರೂ ಇದನ್ನು ಧಾರಣೆ ಮಾಡಬಹುದು. ಕುತ್ತಿಗೆಯಲ್ಲಿ ರುದ್ರಾಕ್ಷ, ಹಣೆಯಲ್ಲಿ ತ್ರಿಪುಂಡ್ರ ಹಾಕಿ

"ಓಂ ನಮಃ ಶಿವಾಯ" ಎಂಬ ಮಂತ್ರ ಪಠಣ ಮಾಡುವ ಮಹಾತ್ಮರಿಗೆ ಯಮಪುರಿ ಗಮನವಿಲ್ಲ. ಹೇ ದೇವಿ! ರುದ್ರಾಕ್ಷಮಾಲೆಯಲ್ಲಿ ಮಂತ್ರ ಜಪಿಸುವುದರಿಂದ ಕೋಟಿ ಗುಣ ಫಲವಿದೆ. ರುದ್ರಾಕ್ಷಿಧಾರಿಗೆ ಹತ್ತು ಕೋಟಿ ಪುಣ್ಯವಿದೆ. ಆತನ ಜೀವನವನ್ನು ಸುಖಮಯ ಪ್ರಶಾಂತ ಮಾಡುತ್ತದೆ. ಆತನಿಗೆ ಅಕಾಲ ಮೃತ್ಯು ಬರುವುದಿಲ್ಲ. ಸದಾ ನಿರೋಗಿ."



ಆಯುರ್ವೇದ ವೈದ್ಯಕೀಯ ರೀತ್ಯಾ ರುದ್ರಾಕ್ಷ :
(ಫಲಾಸ್ಥಿ ರುದ್ರಾಕ್ಷವೆಂದೂ-ಹಿರಿಮೆಯಿಂದ ಕರೆಯು ವರು)

ಕುಲ-ರುದ್ರಾಕ್ಷ :

(Fam-Elaeocarpaceae)

ಭಾಷಾವಾರು ಹೆಸರುಗಳು :-

ಲ್ಯಾಟಿನ್:-Elaeocarpus ganitrus-(Roxb)
ಸಂಸ್ಕೃತ:-ರುದ್ರಾಕ್ಷ, ಭೂತನಾಶನ (ಭೂತಬಾಧಾ-ಮಾನಸ ವಿಕಾರನಾಶಕ)
ಹಿಂದಿ ಯಾ ಎಲ್ಲಾ ಭಾಷೆಗಳಲ್ಲಿ : ರುದ್ರಾಕ್ಷ ಎನ್ನುವರು.
ಅಸ್ಸಾಮಿ :-ರುದ್ರಾಈ

ಸ್ವರೂಪ : ಮಧ್ಯಮಾಕಾರ ಮರ, ಎಲೆ-ಆಯತಾಕಾರ (ಸಾಮಾನ್ಯ ಅಂಟವಾಳ ಎಲೆ ತರ ; ಸ್ವಲ್ಪ ದಪ್ಪ ಸ್ವಲ್ಪಉದ್ದ) 5-6 ಇಂಚು ಇರುತ್ತದೆ. ಸುಮಾರು 2" ಅಗಲ; ಪುಷ್ಪಮಂಜರಿ ಚಿಕ್ಕದು ಅರ್ಧದಿಂದ 1 ಇಂಚ್ ವ್ಯಾಸ. ಉರುಟು, ಅಂಡಾಕಾರ, ಹಸರುಬಣ್ಣ, ಫಲ ಮಜ್ಜಾ-ಹುಳಿ ತಿನ್ನುತ್ತಾರೆ. ಫೆಬ್ರುವರಿ ತಿಂಗಳಲ್ಲಿ ಹೂ ಬಿಡುತ್ತದೆ.

ಇದರಲ್ಲಿ ಅನೇಕ ಜಾತಿಗಳಿವೆ. (ಪಕ್ವಾವಸ್ಥೆಯಿಂದ ಚತುರ್ದಶ (14) ಮಾದರಿಗಳವರೆಗಿದೆ.

ಉತ್ಪತ್ತಿ ಸ್ಥಾನ: ಬಿಹಾರ, ಬಂಗಾಲ, ಮಧ್ಯಪ್ರದೇಶ, ಆಸ್ಸಾಮ, ಮಹಾರಾಷ್ಟ್ರ, ನೇಪಾಳ. ಉತ್ತರಪ್ರದೇಶದಲ್ಲಿಯ ಅಲ್ಲಲ್ಲಿ ಕಾಣ ಸಿಗುತ್ತದೆ. ಇದರ-ರಸ-ಮಧುರ, ಗುಣ-ಗುರು, ಸ್ನಿಗ್ಧ, ವೀರ್ಯ-ಶೀತ. ವಿಪಾಕ-ಮಧುರ.

## ಕರ್ಮ

ದೋಷಕರ್ಮ-ವಾತ, ಪಿತ್ತ ಶಮನ.

ಸಂಸ್ಥಾನಿಕ ಕರ್ಮ-ಬಾಹ್ಯ-ಲೇಪ, ದಾಹನಾಶಕ.

ಆಭ್ಯಂತರ ನಾಡೀಸಂಸ್ಥಾನ—ಮಸ್ತಿಷ್ಕದ ಮೇಲೆ ಪ್ರಭಾವ ಉಂಟುಮಾಡುತ್ತದೆ. ಆಕ್ಷೇಪಕರ ಪ್ರಾಣಿಗಳ ಮೇಲೆ ಇದರ ಪ್ರಭಾವ ಅಂತರ ಇರುವುದರಿಂದ ಮನಸ್ಸಿನ ಮೇಲೆ ಪ್ರಭಾವ ಉಂಟು ಮಾಡುವ ತತ್ವ ಇದರಲ್ಲಿದೆ. ವೇದನಾ ಸ್ಥಾಪನ (ಹಾರಕ)

ಪಾಚನ ಸಂಸ್ಥಾಪನ—ಅಂತ್ರಪೇಶಿಗಳ ಮೇಲೆ ಪ್ರಭಾವ ಉಂಟುಮಾಡುತ್ತದೆ. ಯಕೃತ್‌ನಲ್ಲಿ ಇದರ ವಿಶಿಷ್ಟ ಪ್ರಭಾವ ಉಂಟು ಮಾಡುತ್ತದೆ. ಪಿತ್ತ ಸ್ರಾವ ಬೇಗ ಬೆಳಸುತ್ತದೆ.

ಶ್ವಸನ ಸಂಸ್ಥಾನ :- ಶ್ವಾಸ ನಲಿಕಾ ಸಂಕೋಚ ದೂರಪಡಿಸುತ್ತದೆ.

ರಕ್ತವಹ ಸಂಸ್ಥಾನ : ರಕ್ತವತ್ತಡ ಕಡಿಮೆಮಾಡುತ್ತದೆ. ಕೆಲವು ವೇಳೆ ಸ್ಥಾಯಿಯಾಗಿರುತ್ತದೆ.

ತಾಪ ಕ್ರಮ : ಜ್ವರಘ್ನ.

## ಪ್ರಯೋಗ

ದೋಷಪ್ರಯೋಗ : ವಾತ, ಪಿತ್ತ ರೋಗಗಳಲ್ಲಿ ಉತ್ತಮ.

ಸಾಂಸ್ಥಾನಿಕ ಪ್ರಯೋಗ : ಬಾಹ್ಯ-ದಾಹ ನಾಶಕ, ಚಂದನ, ಗಂಧ ಗಳಂತೆ ತೇದು ಇದರ ಗಂಧವನ್ನು ಮೈಗೆ ಲೇಪಿಸಿಕೊಳ್ಳುವರು. ಮಾನಸಿಕ ಶಾಂತಿಗಾಗಿ ಮಣಿ ಧಾರಣೆ ಮಾಡಿಕೊಳ್ಳುವರು.

ಆಭ್ಯಂತರ ನಾಡಿ ಸಂಸ್ಥಾನ : ಮಾನಸ ವಿಕಾರ, ಆಕ್ಷೇಪಕ, ಅಪತಂತ್ರಕ, ಅನಿದ್ರಾ, ಶಿರೋ ರೋಗ ಇತ್ಯಾದಿಗಳಲ್ಲಿ ಲಾಭದಾಯಕ. ಪಿತ್ಥ ವಿಕ್ಷೇಪ ದೂರವಾಗುತ್ತೆ. ಶಾಂತಿ ಉಂಟಾಗುತ್ತದೆ.

ಪಾಚನ ಸಂಸ್ಥಾನ : ಕಾಮಲಾ ಇತ್ಯಾದಿ ಯಕೃತ್ ವಿಕಾರಗಳಲ್ಲಿ ಪಿತ್ತಸ್ರಾವ ಹೆಚ್ಚಿಸುತ್ತದೆ.

ರಕ್ತವಹ ಸಂಸ್ಥಾನ-ರಕ್ತ ಒತ್ತಡ (Hypertension) ಕ್ಕೆ ಇದು ಉತ್ತಮ. ಇದರ ಜೊತೆ [illegible] ಚೂರ್ಣ ಇದರ ವಟಿಯೂ ಚೆನ್ನಾದ ಕೆಲಸ ಮಾಡುತ್ತದೆ.

ಶ್ವಸನ ಸಂಸ್ಥಾನ: ಶ್ವಾಸರೋಗದಲ್ಲಿಯೂ ಉತ್ತಮ (ಪರ್ವತೀಯರು ಹೆಚ್ಚಾಗಿ ಇದರ ಧಾರಣೆ ಮಾಡಲು ಕಾರಣ ಅಲ್ಲಿ ಆಮ್ಲಜನಕ ಕಡಿಮೆ ಇರುವುದರಿಂದ)

ತಾಪಕ್ರಮ : ಜ್ವರದಲ್ಲಿ ವ್ಯಾಕುಲತೆ ಕಡಿಮೆಯಾಗಿ ಗುಣವಾಗುತ್ತದೆ. ವಿಸ್ಫೋಟ, ಮಸೂರಿಕಾ (ಸಿಡುಬು-ಇದರಲ್ಲಿ ಸ್ವಾನುಭವವಿದೆ. ಪ್ರಾರಂಭಾವಸ್ಥೆಯಲ್ಲಿ ವ್ಯತಿರಿಕ್ತ ಚಿಕಿತ್ಸೆಯಿಂದ ಆಶೆ ಬಿಟ್ಟ-ತೀವ್ರಗತಿಯಿಂದ ನರಳಿದ ರೋಗಿಗೆ ಬರೀ ರುದ್ರಾಕ್ಷಿ(ಪಂಚಮುಖಿ) ತೇದು ಕೊಟ್ಟು ಮತ್ತು ವಿನಃ ವ್ರಣಗಳಲ್ಲಿ ಬರೀ ಶುದ್ಧ "ಕಾಪಿ" ಚೆಲ್ಲಿದ್ದರಿಂದ ರೋಗಿ ಅತಿ ಸುಲಭ ರೀತಿಯಲ್ಲಿ ಗುಣ ಹೊಂದಿದ್ದಲ್ಲದೆ ಮೈಯಲ್ಲಿ ಒಂದು ಕಲೆಯೂ ಇಲ್ಲ. ಮೊದಲು ಕ್ಷೀಣವಾಗಿದ್ದ ವ್ಯಕ್ತಿ ಈಗ ದಷ್ಟಪುಷ್ಟವಾಗಿ ಬೆಳೆದು ಎರಡು ಮಕ್ಕಳನ್ನು ಹೆತ್ತು ಆರೋಗ್ಯವಂತರಾಗಿರುವರು) ಇತ್ಯಾದಿ ಕಾಯಿಲೆಗಳಲ್ಲಿ ಇದನ್ನು ತೇದಿ ಜೇನಿನೊಡನೆ ಕೊಡುತ್ತಾರೆ.

ಪ್ರಯೋಜ್ಯ ಅಂಗ : ಫಲಾಸ್ಥಿ-ಮಣಿ.

ಸೇವನಾ ಪ್ರಮಾಣ : 3 ರಿಂದ 5 ಗ್ರಾಮು.

ರುದ್ರಾಕ್ಷ ಮಮ್ಲಮುಷ್ಣಂ ಚ ವಾತಘ್ನಂ ಕಫ
ನಾಶನಮ್ ।
ಶಿರೋರ್ತಿ ಶಮನಂ ರುಚ್ಯಂ ಭೂತಗ್ರಹ ವಿನಾಶನಮ್॥
"ರಾಜ ನಿಘಂಟು"

ರುದ್ರಾಕ್ಷಸ್ಯ ಫಲಾಸ್ಥಿಸ್ಸ್ಯಾನ್ಮಧುರಂ ಶೀತಲಂ ಲಘು ।
ಮನೋವಿಕಾರ ಶಮನಂ ರಕ್ತ ಭಾರಾ ಪಹಂ
ಪರಮ್ ॥

ದಾಹಜ್ವರಂ ಪ್ರಶಮನಂ ಶಸ್ಯತೆ ವಾತ ಪೈತ್ತಿಕೆ ।
ಅಪಸ್ಮಾರ ತಥೋನ್ಮಾದೆ ರಕ್ತಭಾರೇಧಿಕೆ ತೃಷಿ ॥
ಮಸೂರಿಕಾಯಾಂ ವಿಸ್ಫೋಟೆ ಶ್ವಾಸೆಯತೃದ್ಗದೇ ಚ ॥
(ಪ್ರಿಯವೃತ್ ದೃ. ಗು. ವಿ.)

ರುದ್ರಾಕ್ಷಂ ಚ ಶಿವಾಕ್ಷಂ ಚ ಸರ್ವಾಕ್ಷಂ ಭೂತನಾಶ-
ನಮ್ ।
ಪಾವನಂ ನೀಲಕಂಠಸ್ಯ ಹರಾಕ್ಷಂ ಚ ಶಿವಪ್ರಿಯಮ್ ॥
ರುದ್ರಾಕ್ಷಮಮ್ಲಮುಷ್ಣಂ ಚ ವಾತಘ್ನಂ ಕಫ-
ನಾಶನಮ್ ।
ಶಿರೋರ್ತಿ ಶಮನಂ ರುಚ್ಯಂ ಭೂತಗ್ರಹ ವಿನಾಶನಮ್॥
(ಶಾಲಿಗ್ರಾಮ ನಿಘಂಟು)

## ವಿದೇಶಗಳಲ್ಲಿ ಶಿವ ಮಂದಿರಗಳು

ಭಾರತದ ಹೊರಗೆ ಶಿವ-ಪಾರ್ವತಿ ಸ್ಥಾಪನೆ— ಇದ್ದುದು ಬಲ್ಲಿರಾ ?

1. ಮೆಕ್ಕಾದಲ್ಲಿ ಎರಡು ಶಿವ ಲಿಂಗಗಳಿವೆ.

2. ಗ್ಲಾಸ್ಗೋದಲ್ಲಿ (ಸ್ಕಾಟ್ಲೆಂಡ್) ಸುವರ್ಣ ಚ್ಛಾದಿತ ಶಿವಲಿಂಗವಿದೆ.

3. ತುರ್ಕಸ್ತಾನದ ಬಾಬಿಲಿನ್ ಶಹರಿನಲ್ಲಿ 12 ನೂರು ಅಡಿ ಎತ್ತರದ ಶಿವಲಿಂಗವಿದೆ.

4. ಹೆಡ್ರಿಂ ಪೊಲಿಸ್ ಶಹರಿನಲ್ಲಿ 100 ಅಡಿ ಎತ್ತ-ರದ ಶಿವಲಿಂಗವಿದೆ.

5. ದಕ್ಷಿಣ ಅಮೇರಿಕಾದ ಬ್ರಿಜಿಲ್‌ನಲ್ಲಿ ಅನೇಕ ಶಿವ ಲಿಂಗಗಳಿವೆ.

6. ಕೊರಿಂಥ (ಯೂರೋಪ್) ನಲ್ಲಿ ಪಾರ್ವತಿ ಮಂದಿರವಿದೆ.

7. ಕಂಬೋಡಿಯಾದಲ್ಲಿ ಪ್ರಾಚೀನಕಾಲದಲ್ಲಿ ರಾಜಾ ರಾಜೇಂದ್ರವರ್ಮನಿಂದ ಸ್ಥಾಪಿತ ಶಿವಲಿಂಗವಿದೆ.

8. ಜಾವಾ ಮತ್ತು ಸುಮಾತ್ರಾದಲ್ಲಿ ಅನೇಕ ಶಿವಲಿಂಗಗಳಿವೆ.

9. ಇಂಡೊ ಚೈನಾದಲ್ಲಿ ಅನೇಕ ಭವ್ಯ ದೇವಾಲಯಗಳು ಹಾಗೂ ಪ್ರಾಚೀನ ಶಿಲಾ ಲೇಖವಿದೆ. ಈ ಶಿಲಾ

ಲೇಖಗಳಲ್ಲಿ ಶಿವ ವಿಶಯದ ತುಂಬಾ ಲೇಖಗಳು ಇವೆ. ಅವು ಆರಂಭದಲ್ಲಿ ಬರೆದವುಗಳಾಗಿವೆ.

। ಓಂ ನಮಃ ಶಿವಾಯ ।

ಸರ್ ವಿಲಿಯಂ ಜಾನ್‌ಸನ್ನರ ಹೇಳಿಕೆ ಪ್ರಕಾರ ಇಜಿಪ್ಟಿನ ಸುಪ್ರಸಿದ್ಧ ಸ್ಥಳ ಮತ್ತು ಆಯರ್ಲೆಂಡಿನ ಧರ್ಮಸ್ಥಳ ಶಂಕರರ ಸ್ಮಾರಕ ಲಿಂಗಗಳಿವೆ. ||ಉಪಾಸನೀ||

(ಕಲ್ಯಾಣ ವಿಶೇಷಾಂಕ-ಶಿವೋಪಾಸನಾಂಕ-355)



